12 ಕರಾರು ಒಪ್ಪಂದ ಮಾಡಿಕೊಂಡ ಗುತ್ತಿಗೆದಾರರು ಕೆಲಸದ ಆದೇಶ ಕೊಟ್ಟ ಕೂಡಲೇ ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳ ಮಾರ್ಗದರ್ಶನದಲ್ಲಿ ಇಲಾಖಾ ತಾಂತ್ರಿಕ ಅಂಶಗಳಿಗೆ ತಕ್ಕಂತೆ ಕೆಲಸಗಳನ್ನು ಪ್ರಾರಂಭಿಸಿ ನಿರ್ವಹಿಸುವುದು.

13 ಈ ಕೆಲಸಗಳಿಗೆ ಯಾವುದೇ ಮುಂಗಡ ಹಣವನ್ನು ಪಾವತಿ ಮಾಡಲಾಗುವುದಿಲ್ಲ. ಪೂರ್ಣಗೊಂಡ ಕೆಲಸಗಳಿಗೆ ಕಾಲ ಕಾಲಕ್ಕೆ ಆಯಾ ಕ್ಷೇತ್ರಗಳಿಗೆ ಸಂಬಂಧಿಸಿದ ವನಪಾಲಕರು, ವಲಯ ಅರಣ್ಯಧಿಕಾರಿಗಳು ಹಾಗೂ ಸಂಬಂಧಿಸಿದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳವರ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ದೃಢೀಕರಣವನ್ನು ಕರ್ನಾಟಕ ಅರಣ್ಯ ಲೆಕ್ಕ ಸಂಹಿತೆ ಪ್ರಕಾರ ಮಾಡುವುದು. ಈ ಮೇಲೆ ತಿಳಿಸಿದ ರೀತಿಯಲ್ಲಿ ಪೂರ್ಣಗೊಂಡ ಹಾಗೂ ಪರಿಶೀಲನೆ ಮಾಡಿದ ಕೆಲಸಗಳಿಗೆ ಬಿಲ್ಲುಗಳನ್ನು ತಯಾರಿಸಿ ಸಂಬಂಧಪಟ್ಟ ವಲಯ ಅರಣ್ಯಧಿಕಾರಿಗಳು ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಮುಖಾಂತರ ಸಲ್ಲಿಸುವುದು. ಇಂತಹ ಬಿಲ್ಲುಗಳನ್ನು ಸಂಬಂಧಿಸಿದ ಯೋಜನೆ ಅಡಿಯಲ್ಲಿ ಅನುದಾನದ ಲಭ್ಯತೆ ಹಾಗೂ ಕರ್ನಾಟಕ ಅರಣ್ಯ ಲೆಕ್ಕ ಸಂಹಿತೆ ನಿಬಂಧನೆಗೊಳಪಟ್ಟು ಅನುಗುಣವಾಗಿ ಬಟವಾಡೆಯನ್ನು ಮಾಡಲಾಗುವುದು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳನ್ನು ಕತಾರಾಯಿಸುವುದು.

14 ವಿಜೇತ ಟೆಂಡರ್‌ದಾರರು ನಿಗದಿಪಡಿಸಿದ ಯಾವುದೇ ಕೆಲಸಗಳನ್ನು ಕೈ ಬಿಟ್ಟಲ್ಲಿ ಅರಣ್ಯ ಲೆಕ್ಕ ಸಂಹಿತೆ ನಿಬಂಧನೆಯಂತೆ ಅರಣ್ಯ ತಾಂತ್ರಿಕ ಅಂಶಗಳಿಗೊಳಗೊಂಡು ಸಮರ್ಪಕವಾಗಿ ಕೆಲಸ ನಿರ್ವಹಿಸದಿದ್ದಲ್ಲಿ ಇಡೀ ಟೆಂಡರ್ ರದ್ದುಪಡಿಸಿ ಭದ್ರಾತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕುವುದಲ್ಲದೇ ಯಾವುದೇ ಬಿಲ್ಲುಗಳನ್ನು ಪಾವತಿ ಮಾಡಲಾಗುವುದಿಲ್ಲ.

15 ವಿಜೇತ ಟೆಂಡರ್‌ದಾರರು ನಿಗದಿಪಡಿಸಿದ ಕೆಲಸಗಳನ್ನು ಯಾವುದೇ ಕಾರಣಕ್ಕಾಗಿ ಮಾಡಿ ಮುಗಿಸದೇ ಅಥವಾ ಕಳಪೆ ದರ್ಜೆಯ ಕೆಲಸ ಮಾಡಿದಲ್ಲಿ ಅಂತಹ ಗುತ್ತಿಗೆದಾರರ ಗುತ್ತಿಗೆಯನ್ನು ರದ್ದುಪಡಿಸುವುದಲ್ಲದೇ ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು. ಇಂತಹ ಪರಿಸ್ಥಿತಿಯಲ್ಲಿ ಮುಗಿಯದೇ ಉಳಿದ ಅಥವಾ ಪ್ರಾರಂಭಿಸದೇ ಇರುವಂತಹ ಕಾಮಗಾರಿಗಳನ್ನು ಟೆಂಡರ್‌ದಾರರ ಖರ್ಚು ಮತ್ತು ಜವಾಬ್ದಾರಿ ಮೇಲೆ ಇಲಾಖಾ ಮುಖಾಂತರ ಕೆಲಸ ಮಾಡಿಸಲಾಗುವುದು. ಇದರಿಂದ ಇಲಾಖೆಗೆ ನಷ್ಟ ಉಂಟಾದರೆ ಅಂತಹ ನಷ್ಟವನ್ನು ಮೂಲ ಟೆಂಡರ್‌ದಾರರು ಕಟ್ಟಿಕೊಡಬೇಕಾಗುವುದು.

16 ಈ ಮೇಲಿನ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲ ವಿಜೇತ ಟೆಂಡರ್‌ದಾರರು ಕಟ್ಟಿ ಕೊಡಲು ವಿಫಲರಾದರೆ ಸದರಿ ಮೊತ್ತವನ್ನು ಕರ್ನಾಟಕ ಅರಣ್ಯ ಲೆಕ್ಕ ಸಂಹಿತೆ 1963 ರ ಕಲಂ 109 ಮತ್ತು 119 ರಂತೆ ಭೂ ಕಂದಾಯ ಬಾಕಿಯಂತೆ ವಸೂಲು ಮಾಡಲು ಕ್ರಮ ಕೈಗೊಳ್ಳಲಾಗುವುದು.

17 ಯಾವುದೇ ತಕರಾರಿನ ಬಗ್ಗೆ ಭದ್ರಾವತಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವನ್ನು ಅಧೀನಾಧಿಕಾರಿಗಳು ಹಾಗೂ ಗುತ್ತಿಗೆದಾರರು ಪಾಲನೆ ಮಾಡುವುದು.

18 ಉಪ ಅರಣ್ಯ ಸಂರಕ್ಷಣಾಧಿಕಾರಿರವರ ಆದೇಶದ ಬಗ್ಗೆ ತೃಪ್ತಿ ಇಲ್ಲವಾದರೆ ಅಂತಹ ಆದೇಶದ 30 ದಿನಗಳೊಳಗಾಗಿ ಶಿವಮೊಗ್ಗ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.

19 ಕಾಲ ಕಾಲಕ್ಕೆ ಮೇಲಾಧಿಕಾರಿಗಳು ಅಥವಾ ಸರ್ಕಾರದ ನೀತಿ ನಿಯಮಗಳ ಅನುಸಾರವಾಗಿ ಕೆಲಸಗಳಲ್ಲಿ ಆಗಿಂದಾಗ್ಗೆ ಬದಲಾವಣೆ ಆಗುವ ಸಂಭವವಿದ್ದು, ಅಂತಹ ಬದಲಾವಣೆಗಳಿಗೆ ಹೊಂದಿಕೊಂಡು ಹೋಗುವ ನಿಬಂಧನೆಗೆ ಒಳಪಟ್ಟಿರಬೇಕು.

20 ಈ ಕೆಲಸಗಳನ್ನು ಇಲಾಖೆ ಅಧಿಕಾರಿಗಳು ಸ್ಥಳದಲ್ಲಿ ನೀಡುವ ನಿರ್ದೇಶನಗಳಿಗೆ ಒಳಪಟ್ಟಿರುತ್ತದೆ. ಮತ್ತು ಕಾಲಕಾಲಕ್ಕೆ ನಿರ್ದೇಶಿಸುವ ಕಾಮಗಾರಿಗಳನ್ನು ನಿರ್ವಹಿಸಬೇಕಾಗುತ್ತದೆ.

21 ಯಾವುದೇ ಅಪರಾಧ ಪ್ರಕರಣಗಳನ್ನು ಎದುರಿಸುತ್ತಿರುವ ಅಥವಾ ಶಿಕ್ಷೆಗೆ ಒಳಗಾದವರು ಟೆಂಡರ್ ಹಾಕಲು ಅರ್ಹರಿರುವುದಿಲ್ಲ.

22 ಟೆಂಡರ್ ಪ್ರಕ್ರಿಯೆಯನ್ನು ಯಾವುದೇ ಮುನ್ಸೂಚನೆ ಇಲ್ಲದೇ ಮುಂದೂಡುವ, ರದ್ದುಗೊಳಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರು ಹೊಂದಿರುತ್ತಾರೆ.

23 ಆದ್ಯತೆಯ ಮೇರೆಗೆ ಅನುಕ್ರಮವಾಗಿ ಮಾಡಬೇಕಾಗಿರುವ ಕೆಲಸಗಳ ಪಟ್ಟಿ ಹಾಗೂ ಕರಡು ಅಂದಾಜು ಪಟ್ಟಿ ಈ ಕೆಳ ಸಹಿದಾರರ ಕಛೇರಿಯಲ್ಲಿ ಲಭ್ಯವಿದ್ದು ಪರಿಶೀಲಿಸಿ ಪಡೆಯಬಹುದಾಗಿದೆ.

24 ಸದರಿ ಕಾಮಗಾರಿಗಳು, ಋತುಮಾನಕ್ಕೆ ಅನುಗುಣವಾಗಿ ನಿರ್ವಹಿಸಬೇಕಾದ ಕಾಲಬದ್ಧ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್‌ಗೆ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈ ಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.

25 ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ಕೈಗೊಳ್ಳಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು. ಸಸ್ಯಕ್ಷೇತ್ರ ಬೆಳೆಸಲು ಬೇಕಾಗುವ ಪಾಲಿಥಿನ್ ಚೀಲ, ನೇಯ್ದ

ಚೇಲ ಹಾಗೂ ನೆಡುತೋಪು ಬೇಲಿ ನಿರ್ಮಾಣಕ್ಕೆ ಬೇಕಾಗುವ ಮುಳ್ಳು ತಂತಿ ಮುಂತಾದವುಗಳನ್ನು ಗುಣಮಟ್ಟದ ದೃಷ್ಟಿಯಿಂದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರಿಂದ 2009–10ನೇ ಸಾಲಿಗೆ ಅನುಮೋದಿತ ಗುತ್ತಿಗೆದಾರರಿಂದ ಇಲಾಖಾವತಿಯಿಂದಲೇ ಖರೀದಿಸಿ ಸರಬರಾಜುದಾರರಿಗೆ ಹಣ ಪಾವತಿಗೆ ಕ್ರಮ ಕೈಗೊಳ್ಳಲಾಗುವುದು.

26 ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವುಗಳನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ ಭದ್ರಾವತಿ ಇವರ ತೀರ್ಮಾನವೇ ಅಂತಿಮವಾಗಿರುತ್ತದೆ.

27. ಟೆಂಡರ್‌ದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ಮೂರು ತಿಂಗಳ ನಂತರ ಭದ್ರಾತಾ ಠೇವಣಿ ಶೇ.5 ರ ಮೊತ್ತದ ಬಗ್ಗೆ ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರಿಂದ ಶಿಫಾರಸ್ಸು ಪತ್ರ ಪಡೆದ ನಂತರ ಹಿಂದಿರುಗಿಸಲಾಗುವುದು.

28. ಇತರೆ ಹೆಚ್ಚಿನ ಮಾಹಿತಿ ಮತ್ತು ಸವಿಸ್ತಾರ ಹರಾಜು ಪ್ರಕಟಣೆಯನ್ನು ಕಚೇರಿ ವೇಳೆಯಲ್ಲಿ ಈ ಕೆಳಸಹಿದಾರರ ಕಛೇರಿಯಲ್ಲಿ ಪಡೆಯಬಹುದಾಗಿದೆ.

**ಎಸ್.ಎಸ್. ಲಿಂಗರಾಜ**

ಪಿ.ಆರ್. 779 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

## ಅರಣ್ಯ ಇಲಾಖೆ

### ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಾರ್ಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಸಂಕ್ಷಿಪ್ತ ಮರು ಟೆಂಡರ್ ಪ್ರಕಟಣೆ

**ಸಂಖ್ಯೆ. ಎ2–ಬಿಯುಡಿ–ಕಟ್ಟಡ.180/2009–10, ದಿನಾಂಕ: 5ನೇ ಸೆಪ್ಟೆಂಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2009–10ನೇ ಸಾಲಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗಕ್ಕೆ ಬರುವ ಅಜ್ಜಂಪುರ ಮತ್ತು ಭದ್ರಾವತಿ ವಲಯಗಳಲ್ಲಿ ಸಿವಿಲ್ ಕಾಮಗಾರಿ ನಿರ್ವಹಿಸುವ ಸಲುವಾಗಿ ಆಸಕ್ತ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಗುತ್ತಿಗೆದಾರರು ದಿನಾಂಕ: 05–10–2009 ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರ ಕಛೇರಿಯಲ್ಲಿರಿಸಿದ ಟೆಂಡರ್ ಪೆಟ್ಟಿಗೆಗೆ ಹಾಕಲು ಕೋರಿದೆ. ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಅಪರಾಹ್ನ 4.00 ಗಂಟೆಗೆ ತೆರೆಯಲಾಗುತ್ತದೆ.

ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರು ಟೆಂಡರ್ ಹಾಕದಿದ್ದಲ್ಲಿ ಇದೇ ಟೆಂಡರ್ ಪ್ರಕ್ರಿಯೆಯನ್ನು ಮುಂದುವರೆಸಿ ಮರು ಟೆಂಡರ್‌ನ್ನು ದಿನಾಂಕ: 07–10–2009 ರಂದು ಅಪರಾಹ್ನ 3.00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಅಪರಾಹ್ನ 4.00 ಗಂಟೆಗೆ ತೆರೆಯಲಾಗುವುದು.

| ಕ್ರ. ಸಂ. | ವಲಯ | ಘಟಕ ಸಂಖ್ಯೆ | ಕಾಮಗಾರಿಯ ವಿವರ | ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ |
|---|---|---|---|---|---|
| 1 | 2 | 3 | 4 | 5 | 6 |
| 1 | ಅಜ್ಜಂಪುರ | 1 | ಕೆ.ಎಸ್.ಎಫ್.ಎಂ.ಬಿ.ಸಿ. 132 ಬಂಡವಾಳ ವೆಚ್ಚಗಳ ಶೀರ್ಷಿಕೆ ಯಡಿಯಲ್ಲಿ ಅಜ್ಜಂಪುರ ವಲಯ ಅರಣ್ಯಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ. 1 ಸಂಖ್ಯೆ | 8.00 | 20000 |
| 2 | ಭದ್ರಾವತಿ | 2 | ಕೆ.ಎಸ್.ಎಫ್.ಎಂ.ಬಿ.ಸಿ. 132 ಬಂಡವಾಳ ವೆಚ್ಚಗಳ ಶೀರ್ಷಿಕೆ ಯಡಿಯಲ್ಲಿ ಭದ್ರಾವತಿಯಲ್ಲಿ ಸಿಬ್ಬಂದಿ ಕಟ್ಟಡ ನಿರ್ಮಾಣ. 1 ಸಂಖ್ಯೆ. | 6.40 | 16000 |

**ನಿಬಂಧನೆಗಳು:**

1 ಟೆಂಡರ್ ಹಾಕಲು ಇಚ್ಚಿಸುವ ಗುತ್ತಿಗೆದಾರರು ಎರಡು ಕವರ್ ಸಿಸ್ಟಮ್‌ನಲ್ಲಿ ಟೆಂಡರ್‌ಗಳನ್ನು ಹಾಕಬೇಕು. ಒಂದು ಕವರನ್ನು ಟೆಕ್ನಿಕಲ್ ಬಿಡ್ ಕವರ್ ಎಂದು ಇನ್ನೊಂದನ್ನು ಫೈನಾನ್ಸಿಯಲ್ ಬಿಡ್ ಕವರ್ ಎಂದು ಕರೆಯಲಾಗುವುದು. ಟೆಕ್ನಿಕಲ್ ಬಿಡ್ ಕವರಿನಲ್ಲಿ ಗುತ್ತಿಗೆದಾರರು ತಾಂತ್ರಿಕತೆ ಹಾಗೂ ಅವರಿಗೆ ನಿಗದಿಪಡಿಸಿದ ಅನುಭವಗಳನ್ನೊಳಗೊಂಡಂತೆ ಪ್ರಮಾಣ ಪತ್ರಗಳನ್ನು ಇಡುವುದು. ಫಿನಾನ್ಸಿಯಲ್ ಬಿಡ್ ಕವರಿನಲ್ಲಿ ಟೆಂಡರಿಗೆ ಸಂಬಂಧಿಸಿದ ಟೆಂಡರ್ ಫಾರ್ಮನ್ನು ಪೂರ್ಣವಾಗಿ ಭರ್ತಿ ಮಾಡಿ ಯುನಿಟ್ ದರಕ್ಕೆ ಸಮನಾಗಿ/ಕಡಿಮೆ/ಹೆಚ್ಚು ಪ್ರತಿಶತ ದರಗಳನ್ನು ಸೂಚಿಸಿ ಹಾಕುವುದು.

2 ಟೆಂಡರ್ ಹಾಕಲು ಇಚ್ಚಿಸುವ ಗುತ್ತಿಗೆದಾರರು ಒಂದಕ್ಕಿಂತ ಹೆಚ್ಚು ಟೆಂಡರ್ ಹಾಕಲು ಇಚ್ಚಿಸಿದಲ್ಲಿ ಒಂದೇ ಟೆಕ್ನಿಕಲ್ ಬಿಡ್ ಕವರನ್ನು ಹಾಕುವುದು. ಆದರೆ, ಫೈನಾನ್ಸಿಯಲ್ ಬಿಡ್‌ನ್ನು ಪ್ರತಿ ಘಟಕಕ್ಕೆ ಒಂದರಂತೆ ಹಾಕಬೇಕಾಗುವುದು.

3 ಮೊದಲಿಗೆ ಟೆಕ್ನಿಕಲ್ ಬಿಡ್ ಕವರನ್ನು ಒಡೆದು ಅದರಲ್ಲಿಯ ವಿವರಗಳನ್ನು ಪರಿಶೀಲಿಸಿ ಅ.ನಂ. 7 ಹಾಗೂ ಅ.ನಂ. 8 ರಲ್ಲಿ ನಿಗದಿಪಡಿಸಿದ ದಾಖಲೆ ಅಥವಾ ಪ್ರಮಾಣ ಪತ್ರಗಳನ್ನು ಪೂರ್ಣ ಪ್ರಮಾಣದಲ್ಲಿ ಒದಗಿಸಿದಂತಹ ಗುತ್ತಿಗೆದಾರರು ಹಾಕಿದಂತಹ ಫೈನಾನ್ಸಿಯಲ್ ಬಿಡ್ ಕವರ್‌ಗಳನ್ನು ಮಾತ್ರ ತೆರೆಯಲಾಗುವುದು. ಉಳಿದ ಕವರ್‌ಗಳನ್ನು ತೆರೆಯಲಾಗುವುದಿಲ್ಲ.

4 ಟೆಂಡರನ್ನು ದಿನಾಂಕ: 05–10–2009 ರಂದು ಅಪರಾಹ್ನ 3.00 ಘಂಟೆಯವರೆಗೆ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಹಾಕಬಹುದು. ಟೆಂಡರ್ ಹಾಕಲು ಇಚ್ಚೆಯುಳ್ಳ ನೊಂದಾಯಿತ ಅರಣ್ಯ ಗುತ್ತಿಗೆದಾರರು ಟೆಂಡರ್ ಫಾರ್ಮನ್ನು ದಿನಾಂಕ: 05–10–2009 ರ ಅಪರಾಹ್ನ 1.00 ಘಂಟೆಯವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ರೂ. 200 ಮತ್ತು ಇತರೇ ತೆರಿಗೆಗಳನ್ನು ಪಾವತಿಸಿ ಈ ಕಛೇರಿಯಿಂದ ಪಡೆದುಕೊಳ್ಳಬಹುದಾಗಿದೆ. ಟೆಂಡರ್ ಫಾರಂಗಳನ್ನು ವರ್ಗಾಯಿಸುವಂತಿಲ್ಲ.

5 ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ: 05–10–2009 ರಂದು ಈ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಘಂಟೆಗೆ ಹಾಜರು ಇರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆಗೆಯಲಾಗುವುದು.

6 ಈ ಟೆಂಡರ್ ಪ್ರಕಟಣೆಯಲ್ಲಿ ಕೈಗೊಳ್ಳಬೇಕಾಗಿರುವ ಎಲ್ಲ ಕಾಮಗಾರಿಗಳನ್ನು ದಿನಾಂಕ: 15–03–2010 ರೊಳಗೆ ಮುಕ್ತಾಯಗೊಳಿಸಬೇಕಾಗುತ್ತದೆ.

7 ಕಟ್ಟಡ ನಿರ್ಮಾಣಗಳಂತಹ ಸಿವಿಲ್ ಕಾಮಗಾರಿಗಳಲ್ಲಿ ಅನುಭವ ಹೊಂದಿರುವ ಬಗ್ಗೆ ಕಾರ್ಯಪಾಲಕ ಅಭಿಯಂತರರಿಗಿಂತ ಕಡಿಮೆ ಇಲ್ಲದ ಅಧಿಕಾರಿಗಳಿಂದ ಪ್ರಮಾಣ ಪತ್ರ ಹೊಂದಿರಬೇಕು.

8 **ಟೆಕ್ನಿಕಲ್ ಕವರ್ ಜೊತೆ ಇಡಬೇಕಾದ ಅವಶ್ಯ ದಾಖಲೆಗಳು**

ಅ) ಈ ವಿಭಾಗದಲ್ಲಿ ಟೆಂಡರ್ ಹಾಕುವ ಮೊದಲು ಅರಣ್ಯ ಗುತ್ತಿಗೆದಾರರೆಂದು ನೊಂದಣಿ ಮಾಡಿದ್ದಕ್ಕೆ ಚಾಲ್ತಿಯಲ್ಲಿದ್ದ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

ಆ) ಆದಾಯ ತೆರಿಗೆ 1961 ನೇದರ ಕಾಯ್ದೆ ಮತ್ತು ನಿಯಮಗಳ ಅಡಿಯಲ್ಲಿ ಆದಾಯ ತೆರಿಗೆ ಇಲಾಖೆಯಿಂದ ಪಡೆದ TAN/PAN ನಂಬರ್ ಹೊಂದಿದವರಾಗಿರಬೇಕು. ಅದರ ಧೃಡೀಕೃತ ಪ್ರತಿಯನ್ನು ಟೆಕ್ನಿಕಲ್ ಟೆಂಡರ್ ಲಕೋಟೆಯಲ್ಲಿ ಇಡತಕ್ಕದ್ದು.

ಇ) ಕರ್ನಾಟಕ ವ್ಯಾಟ್ (KVAT) ನಂಬರನ್ನು ನಿಯಮಾವಳಿಗಳ ಪ್ರಕಾರ ಟಿನ್ (TIN) ನಂಬರನ್ನು ಪಡೆದವರಾಗಿರಬೇಕು. ಟಿನ್ (TIN) ನಂಬರ್ ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಟೆಕ್ನಿಕಲ್ ಟೆಂಡರ್ ಲಕೋಟೆಯಲ್ಲಿ ಇಡತಕ್ಕದ್ದು.

ಈ) ಗುತ್ತಿಗೆದಾರರು ಕನಿಷ್ಟ ರೂ. 300000–00 ಬ್ಯಾಂಕ್ ಬ್ಯಾಲನ್ಸ್/ಠೇವಣಿ/ಬ್ಯಾಂಕ್‌ನಿಂದ ಸಾಲ ಪಡೆಯುವ ಬಗ್ಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ಡ್ ಬ್ಯಾಂಕ್‌ನವರಿಂದ ಕನಿಷ್ಠ ರೂ.300000 ಲಕ್ಷ ಖಾತ್ರಿ ಪ್ರಮಾಣ ಪತ್ರ ಹೊಂದಿರತಕ್ಕದ್ದು ಹಾಗೂ ಪತ್ರದ ನಕಲು ಇಡುವುದು.

ಉ) ಗುತ್ತಿಗೆದಾರರು ಲೇಬರ್ ಆ್ಯಕ್ಟ್ ನಿಯಮಾವಳಿಗಳ ಅನುಸಾರ ನೊಂದಾಯಿಸಿದ ಕೂಲಿಕಾರರ ವಿವರವನ್ನು ಟೆಕ್ನಿಕಲ್ ಲಕೋಟೆಯಲ್ಲಿ ಇಡುವುದು.

ಊ) ಗುತ್ತಿಗೆದಾರರು ವಿಶೇಷ ಸೌಲಭ್ಯ (ವಾಹನ, ಟ್ರ್ಯಾಕ್ಟರ್) ಇದ್ದಲ್ಲಿ ನಮೂದಿಸಿ ಟೆಕ್ನಿಕಲ್ ಕವರ್‌ನಲ್ಲಿ ಇಡುವುದು.

ಋ) ವಿಳಾಸ ಖಾತ್ರಿಗಾಗಿ ಕಳೆದ ಎರಡು ತಿಂಗಳುಗಳಲ್ಲಿ ಪಡೆದಂತಹ ಟೆಲಿಫೋನ್ ಬಿಲ್ ಅಥವಾ ಚುನಾವಣಾ ಗುರುತಿನ ಚೀಟಿ ಅಥವಾ ಪಡಿತರ ಚೀಟಿ ಅಥವಾ ಬ್ಯಾಂಕಿನಿಂದ ಪಡೆದಂತಹ ಪಾಸ್ ಬುಕ್ ಅಥವಾ ಸ್ಥಳೀಯ ನಗರಸಭೆ/ಪುರಸಭೆ/ಗ್ರಾಮ ಪಂಚಾಯತ್/ಕಂದಾಯ ಇಲಾಖೆಯಿಂದ ಪಡೆದಂತಹ ವಿಳಾಸ ಹೊಂದಿದ ಪ್ರಮಾಣ ಪತ್ರದ ನಕಲು ಇಡುವುದು.

9 ಟೆಂಡರ್‌ದಾರರು ಪ್ರತಿ ಯುನಿಟ್‌ಗೆ ಪ್ರತ್ಯೇಕ ಟೆಂಡರ್ ಸಲ್ಲಿಸಬೇಕು ಹಾಗೂ ದರವನ್ನು ಪ್ರತಿ ಯುನಿಟ್‌ಗೆ ನಿಗದಿಪಡಿಸಿದ ಯುನಿಟ್ ದರಕ್ಕೆ ಸಮನಾಗಿ/ಕಡಿಮೆ/ಹೆಚ್ಚು ಪ್ರತಿಶತ ದರಗಳನ್ನು **ಸೂಚಿಸಿ ಹಾಕುವುದು.** ಆ ಕೆಲಸಕ್ಕೆ ಸಂಬಂಧಿಸಿದ ಅಂದಾಜು ಪತ್ರಿಕೆಯಲ್ಲಿ ನಿಗದಿಪಡಿಸಿದ ಎಲ್ಲ ಕೆಲಸಗಳನ್ನು ದಿನಾಂಕ: 15–03–2010 ರೊಳಗೆ ನಿರ್ವಹಿಸುವುದು.

10 ಟೆಂಡರ್ ಸಲ್ಲಿಸುವ ಗುತ್ತಿಗೆದಾರರು ಆಯಾ ಯುನಿಟ್ ಮುಂದೆ ಸೂಚಿಸಿದ ಮೊತ್ತದ ಇಡುಗಂಟನ್ನು (ಇ.ಎಂ.ಡಿ)ಆಯಾ ಯುನಿಟ್‌ಗಳಿಗೆ ಪ್ರತ್ಯೇಕವಾಗಿ ಟೆಂಡರ್‌ನೊಂದಿಗೆ ತೋರಿಸಿರುವಂತೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಲಗತ್ತಿಸಬೇಕು.

11 ಯಶಸ್ವಿಯಾದ ಬಿಡ್ಡುದಾರರು ಭದ್ರಾತಾ ಠೇವಣಿಯಾಗಿ ಕಾಮಗಾರಿ ಮೊತ್ತಕ್ಕೆ ಶೇ.5 ರಷ್ಟು ಮೊಬಲಗಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ರವರ ಹೆಸರಿಗೆ ಯಾವುದಾದರು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿ.ಡಿ. ಒಪ್ಪಿಸಿ ರೂ.20/– ರ ಛಾಪಾ ಕಾಗದದಲ್ಲಿ ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶ ಪಡೆಯುವುದು ವಿಜೇತರಲ್ಲದ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಅದೇ ದಿನ ಹಿಂದಿರುಗಿಸಲಾಗುವುದು. ಹಾಗೂ ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ.ಯನ್ನು ಭದ್ರಾತಾ ಠೇವಣಿಗೆ ಹೊಂದಿಸಿಕೊಳ್ಳಲಾಗುವುದು.

12 ಕರಾರು ಒಪ್ಪಂದ ಮಾಡಿಕೊಂಡ ಗುತ್ತಿಗೆದಾರರು ಕೆಲಸದ ಆದೇಶ ಕೊಟ್ಟ ಕೂಡಲೇ ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳ ಮಾರ್ಗದರ್ಶನದಲ್ಲಿ ಕೆಲಸಗಳನ್ನು ಪ್ರಾರಂಭಿಸಿ ನಿರ್ವಹಿಸುವುದು.

13 ಈ ಕೆಲಸಗಳಿಗೆ ಯಾವುದೇ ಮುಂಗಡ ಹಣವನ್ನು ಪಾವತಿ ಮಾಡಲಾಗುವುದಿಲ್ಲ. ಪೂರ್ಣಗೊಂಡ ಕೆಲಸಗಳಿಗೆ ಕಾಲ ಕಾಲಕ್ಕೆ ಆಯಾ ಕ್ಷೇತ್ರಗಳಿಗೆ ಸಂಬಂಧಿಸಿದ ವನಪಾಲಕರು, ವಲಯ ಅರಣ್ಯಧಿಕಾರಿಗಳು ಹಾಗೂ ಸಂಬಂಧಿಸಿದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳವರ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ಧೃಡೀಕರಣವನ್ನು ಕರ್ನಾಟಕ ಅರಣ್ಯ ಲೆಕ್ಕ ಸಂಹಿತೆ ಪ್ರಕಾರ ಮಾಡುವುದು. ಈ ಮೇಲೆ ತಿಳಿಸಿದ ರೀತಿಯಲ್ಲಿ ಪೂರ್ಣಗೊಂಡ ಹಾಗೂ ಪರಿಶೀಲನೆ ಮಾಡಿದ ಕೆಲಸಗಳಿಗೆ ಬಿಲ್ಲುಗಳನ್ನು ತಯಾರಿಸಿ ಸಂಬಂಧಪಟ್ಟ ವಲಯ ಅರಣ್ಯಧಿಕಾರಿಗಳು ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಮುಖಾಂತರ ಸಲ್ಲಿಸುವುದು. ಇಂತಹ ಬಿಲ್ಲುಗಳನ್ನು ಸಂಬಂಧಿಸಿದ ಯೋಜನೆ ಅಡಿಯಲ್ಲಿ ಅನುದಾನದ ಲಭ್ಯತೆ ಹಾಗೂ ಕರ್ನಾಟಕ ಅರಣ್ಯ ಲೆಕ್ಕ ಸಂಹಿತೆ ನಿಬಂಧನೆಗೊಳಪಟ್ಟು ಅನುಗುಣವಾಗಿ ಬಟವಾಡೆಯನ್ನು ಮಾಡಲಾಗುವುದು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳನ್ನು ಕತಾರಾಯಿಸುವುದು.

14 ವಿಜೇತ ಟೆಂಡರ್‌ದಾರರು ನಿಗದಿಪಡಿಸಿದ ಯಾವುದೇ ಕೆಲಸಗಳನ್ನು ಕೈ ಬಿಟ್ಟಲ್ಲಿ ಅರಣ್ಯ ಲೆಕ್ಕ ಸಂಹಿತೆ ನಿಬಂಧನೆಯಂತೆ ಅರಣ್ಯ ತಾಂತ್ರಿಕ ಅಂಶಗಳಿಗೊಳಗೊಂಡು ಸಮರ್ಪಕವಾಗಿ ಕೆಲಸ ನಿರ್ವಹಿಸದಿದ್ದಲ್ಲಿ ಇಡೀ ಟೆಂಡರ್ ರದ್ದುಪಡಿಸಿ ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕುವುದಲ್ಲದೇ ಯಾವುದೇ ಬಿಲ್ಲುಗಳನ್ನು ಪಾವತಿ ಮಾಡಲಾಗುವುದಿಲ್ಲ.

15 ವಿಜೇತ ಟೆಂಡರ್‌ದಾರರು ನಿಗದಿಪಡಿಸಿದ ಕೆಲಸಗಳನ್ನು ಯಾವುದೇ ಕಾರಣಕ್ಕಾಗಿ ಮಾಡಿ ಮುಗಿಸದೇ ಅಥವಾ ಕಳಪೆ ದರ್ಜೆಯ ಕೆಲಸ ಮಾಡಿದಲ್ಲಿ ಅಂತಹ ಗುತ್ತಿಗೆದಾರರ ಗುತ್ತಿಗೆಯನ್ನು ರದ್ದುಪಡಿಸುವುದಲ್ಲದೇ ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು. ಇಂತಹ ಪರಿಸ್ಥಿತಿಯಲ್ಲಿ ಮುಗಿಯದೇ ಉಳಿದ ಅಥವಾ ಪ್ರಾರಂಭಿಸದೇ ಇರುವಂತಹ ಕಾಮಗಾರಿಗಳನ್ನು ಟೆಂಡರ್‌ದಾರರ ಖರ್ಚು ಮತ್ತು ಜವಾಬ್ದಾರಿ ಮೇಲೆ ಇಲಾಖಾ ಮುಖಾಂತರ ಕೆಲಸ ಮಾಡಿಸಲಾಗುವುದು. ಇದರಿಂದ ಇಲಾಖೆಗೆ ನಷ್ಟ ಉಂಟಾದರೆ ಅಂತಹ ನಷ್ಟವನ್ನು ಮೂಲ ಟೆಂಡರ್‌ದಾರರು ಕಟ್ಟಿಕೊಡಬೇಕಾಗುವುದು.

16 ಈ ಮೇಲಿನ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲ ವಿಜೇತ ಟೆಂಡರ್‌ದಾರರು ಕಟ್ಟಿ ಕೊಡಲು ವಿಫಲರಾದರೆ ಸದರಿ ಮೊತ್ತವನ್ನು ಕರ್ನಾಟಕ ಅರಣ್ಯ ಲೆಕ್ಕ ಸಂಹಿತೆ 1963 ರ ಕಲಂ 109 ಮತ್ತು 119 ರಂತೆ ಭೂ ಕಂದಾಯ ಬಾಕಿಯಂತೆ ವಸೂಲು ಮಾಡಲು ಕ್ರಮ ಕೈಗೊಳ್ಳಲಾಗುವುದು.

17 ಯಾವುದೇ ತಕರಾರಿನ ಬಗ್ಗೆ ಭದ್ರಾವತಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವನ್ನು ಅಧೀನಾಧಿಕಾರಿಗಳು ಹಾಗೂ ಗುತ್ತಿಗೆದಾರರು ಪಾಲನೆ ಮಾಡುವುದು.

18 ಉಪ ಅರಣ್ಯ ಸಂರಕ್ಷಣಾಧಿಕಾರಿರವರ ಆದೇಶದ ಬಗ್ಗೆ ತೃಪ್ತಿ ಇಲ್ಲವಾದರೆ ಅಂತಹ ಆದೇಶದ 30 ದಿನಗಳೊಳಗಾಗಿ ಶಿವಮೊಗ್ಗ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.

19 ಕಾಲ ಕಾಲಕ್ಕೆ ಮೇಲಾಧಿಕಾರಿಗಳು ಅಥವಾ ಸರ್ಕಾರದ ನೀತಿ ನಿಯಮಗಳ ಅನುಸಾರವಾಗಿ ಕೆಲಸಗಳಲ್ಲಿ ಆಗಿಂದಾಗ್ಗೆ ಬದಲಾವಣೆ ಆಗುವ ಸಂಭವವಿದ್ದು, ಅಂತಹ ಬದಲಾವಣೆಗಳಿಗೆ ಹೊಂದಿಕೊಂಡು ಹೋಗುವ ನಿಬಂಧನೆಗೆ ಒಳಪಟ್ಟಿರಬೇಕು.

20 ಈ ಕೆಲಸಗಳನ್ನು ಇಲಾಖೆ ಅಧಿಕಾರಿಗಳು ಸ್ಥಳದಲ್ಲಿ ನೀಡುವ ನಿರ್ದೇಶನಗಳಿಗೆ ಒಳಪಟ್ಟಿರುತ್ತದೆ. ಮತ್ತು ಕಾಲಕಾಲಕ್ಕೆ ನಿರ್ದೇಶಿಸುವ ಕಾಮಗಾರಿಗಳನ್ನು ನಿರ್ವಹಿಸಬೇಕಾಗುತ್ತದೆ.

21 ಯಾವುದೇ ಅಪರಾಧ ಪ್ರಕರಣಗಳನ್ನು ಎದುರಿಸುತ್ತಿರುವ ಅಥವಾ ಶಿಕ್ಷೆಗೆ ಒಳಗಾದವರು ಟೆಂಡರ್ ಹಾಕಲು ಅರ್ಹರಿರುವುದಿಲ್ಲ.

22 ಟೆಂಡರ್ ಪ್ರಕ್ರಿಯೆಯನ್ನು ಯಾವುದೇ ಮುನ್ಸೂಚನೆ ಇಲ್ಲದೇ ಮುಂದೂಡುವ, ರದ್ದುಗೊಳಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರು ಹೊಂದಿರುತ್ತಾರೆ.

23 ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ಕೈಗೊಳ್ಳಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.

24 ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವುಗಳನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ ಭದ್ರಾವತಿ ಇವರ ತೀರ್ಮಾನವೇ ಅಂತಿಮವಾಗಿರುತ್ತದೆ.

25. ಟೆಂಡರ್‌ದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ಒಂದು ವರ್ಷದ ನಂತರ ಭದ್ರತಾ ಠೇವಣಿ ಶೇ.5 ರ ಮೊತ್ತದ ಬಗ್ಗೆ ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಯವರಿಂದ ಶಿಫಾರಸ್ಸು ಪತ್ರ ಪಡೆದ ನಂತರ ಹಿಂದಿರುಗಿಸಲಾಗುವುದು.

26. ಇತರೆ ಹೆಚ್ಚಿನ ಮಾಹಿತಿ ಮತ್ತು ಸವಿಸ್ತಾರ ಹರಾಜು ಪ್ರಕಟಣೆಯನ್ನು ಕಚೇರಿ ವೇಳೆಯಲ್ಲಿ ಈ ಕೆಳಸಹಿದಾರರ ಕಛೇರಿಯಲ್ಲಿ ಪಡೆಯಬಹುದಾಗಿದೆ.

**ಎಸ್.ಎಸ್. ಲಿಂಗರಾಜ**

ಪಿ.ಆರ್. 780 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**

**ಅಧಿಸೂಚನೆ**

**ಸಂ.ಎ7.ನಾಟಾ ಹರಾಜು:ಸಿಆರ್:1:2009–10, ಚಿಕ್ಕಮಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿರುವ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ, ಸಾಗುವಾನಿ, ಇತರೆ ಜಾತಿಯ ನಾಟಾ ಹಾಗೂ ಸೌದೆಗಳನ್ನು ಡಿಪೋಗಳ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ಡಿಪೋವಿನ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ / ಸೌದೆಯ ಅಂದಾಜು ಪ್ರಮಾಣ (ಘ.ಮೀ. ಗಳಲ್ಲಿ) | | |
|---|---|---|---|---|---|
| | | | ಸಾಗುವಾನಿ ನಾಟಾ | ಕಾಡು / ಮನ್ನಾ ಜಾತಿ ಮತ್ತು ಇತರೆ ಜಾತಿಯ ನಾಟಾ | ಸೌದೆ |
| 1. | ಸರ್ಕಾರಿ ನಾಟಾ ಸಂಗ್ರಹಾಲಯ, ಕಡೂರು | 13–10–2009 | 2.148 | ತಾರಿ – 3.598<br>ಕಾಡು ಜಾತಿ – 9.452<br>ಅಕೇಶಿಯಾ – 2.641 | ಬೀಟೆ – 43.507 |

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

**Office of the Deputy Conservator of Forests, Chikmagalur Division, Chikmagalur**

**NOTIFICATION**

**No.A7.Timber Auction/CR/1/2009-10, Chikmagalur, dated: 10th September 2009**

It is hereby notified for the information of general public that Rosewood, Teak and other kind timber poles, firewood available in the following Government Timber Depots of Chikmagalur Division will be sold in public auction on the date shown against each depots.

| Sl. No. | Name of the Depot | Date of Sale | Approximate quantity of timber, firewood, etc., exposed for Sale (in M3) | | |
|---|---|---|---|---|---|
| | | | Teak | Other kind | Firewood |
| 1. | Govt. Timber Depot, Kadur | 13-10-2009 | 2.148 | Thaari – 3.598<br>Junglewood – 9.452<br>Acacia – 2.641 | Rosewood (Beete) – 43.507 |

Deputy Conservator of Forests,
P.R. 781 Chikmagalur Division, CHIKMAGALUR.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**Office of the Executive Engineer (Ele) PWD Electrical Division, K.R. Circle, Bangalore – 560 001**

**INVITATION FOR TENDERS (IFT)**

**(for buildings work costing Rs. One Crore and above using K/W-4 document)**

**IFT No. 51: EE/PWD-E/B/V.V.C/M.Lift/2009-10, Dated: 5th September 2009**

1. The **Executive Engineer PWD Electrical Division, Bangalore** invites from eligible reputed Firms / Agencies / Manufacturers for **Supply, erection, testing and commissioning passengers Elevators** as detailed in the Table below. The Tenderers may submit tenders the work given in the Table through e-procurement portal of the Government of Karnataka (viz: http://eproc.karnataka.gov.in). The Tenderers are advised to note the minimum qualification criteria specified in Clause 3 of the Instructions to Tenderers to qualify for award of the contract. {Standard Tender Document-KW-4(2 Cover system)}

2. Tender documents may be downloaded from the e-procurement portal of the Government of Karnataka from **19-09-2009 to 23-09-2009.**
3. Tenders must be accompanied by earnest money deposit specified for the work in the Table below. Earnest money deposit will have to be in any one of the forms as instructions in the e-procurement portal and shall have to be valid for **45 days** beyond the validity of the tender.
4. Blank Tender can be downloaded only who have completed at least one similar nature of work **(i.e. Supply, erection, testing and commissioning 20 passengers High Speed Elevators 2 Nos)** to an extent of 80% of the cost of the work i.e. **100.00 Lakhs.** and Work Completion Certificate for having carried out such similar nature of works shall be produced at the time of requisition letter for tender form.
5. Tenderer must have achieved in at least two financial years a minimum financial turnover of **Rs.240.00 Lakhs** during the last five years i.e. **2004-2005 to 2008-2009** to qualify for award of this contract. The Tenderer shall be in the field of Supply, erection, testing and commissioning passengers Elevators for **Past Five** years.
6. The tenderer must be accompanied credit line / letter of credit / certificate from bank for meeting the fund requirement of not less than **Rs.36.00 Lakhs.**
7. The bidder / Tenderer should furnish the certificate from the **OEM (Original Equipment manufacturers)** for erection, commissioning and further maintenance of the elevator.
8. Tenders must be submitted online in **e-procurement** portal on or **before 16:00 hours on 26.09.2009.** and the opening of tenders will be as per e-procurement portal guidelines.
9. Other details can be seen in the tender documents.

**TABLE**

| Package No. | Name of work | Approximate value of work (Rs. in lakhs) | Earnest Money Deposit @ 1.5% (in Rs.) | Cost of document (in Rs.) | Period of completion | Nos of Call |
|---|---|---|---|---|---|---|
| 1 | Supply, Erection, testing and commissioning of 2 Nos of 20 passengers high speed Elevators (Lift No 3 & 4) at V.V. Center, Bangalore. (OTIS/MITSUBHISHI/KONE MAKE) | 120.00 Lakhs | 2.00 Lakhs | 5000.00 +Tax as applicable | 6 Months | 2nd Call |

P.R. 774 Executive Engineer (Ele) PWD Electrical Division, Bangalore-01

**IN THE COURT OF THE IV ADDL. CITY CIVIL JUDGE AT MAYOHALL:BANGALORE (CCH-21)**

**P & SC No.25027/2009 HG: 01/10/2009**

**PETITIONER** : Lakshmi W/o late Madurai Swamy 64 yrs Mother of Late M. Ramesh residing at No.13-E 8th cross, Chitrayappa Garden, Neelasandra Main Road, Bangalore-47

**V/s**

**RESPONDENTS** : Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate in respect of the amount in Postal Life Insurance, of deceased Sri M.Ramesh, Who died on 2/4/09 at Bangalore.

Be it known that no caveat has been entered and the said petition is posted for hearing on 01/10/2009 at 11'O clock. Any person's claiming to have any interest may come and participate in the proceedings before grant of Succession certificate to the petitioner.

**SCHEDULE**

1. The Sum of Rs. 1 lakh pending in the Postal Life Insurance of which is in the name of her husband Madurai Swamy which was done by her deceased son ramesh who expired while in service in Military.
2. Pension of the petitioner's son Ramesh.

Given under my hand and the seal of this Court on this the 5th day of September 2009, at Bangalore.

By Order of the Court

P.D. 107 Asst. Registrar, City Civil Court, Mayohall, Bangalore.

**IN THE COURT OF THE IV ADDL. CITY CIVIL JUDGE AT MAYOHALL:BANGALORE (CCH-21)**

**P & SC No.25021/2009 HG: 07/11/2009**

**PETITIONER** : 1. Mr. Chandrashekar, S/o late G.Rangaswamy, aged about 58 years,
2. Mr. Yolongovan, S/o late G. Rangaswamy, aged about 56 years,
3. Smt. Mani Megalai, D/o late G. Rangaswamy, aged about 54 years,
All are R/at No.12/3, G. No.8th Street, Jogupalya, Halasuru, Bangalore-8.

**V/s**

**RESPONDENTS** : Nil

**PUBLIC NOTICE**

Notice is hereby given that a petition has been made to this Court Under Sec 371 & 372 of the Indian Succession Act, for grant of Succession Certificate in respect of EPF organisation of G.Rangaswamy., who died on 21/11/2004 at Bangalore.

Be it known that no caveat has been entered and the said petition is posted for hearing on 07/11/2009 at 11'O clock. Any person's claiming to have any interest may come and participate in the proceedings before grant of Succession certificate to the petitioners.

Given under my hand and seal of this Court, IV Addl. on this the 5th day of September 2009,

By Order of the Court

P.D. 108 Asst. Registrar, City Civil Court, Mayohall, Bangalore.

**IN THE COURT OF THE IV ADDL. CITY CIVIL JUDGE AT MAYOHALL:BANGALORE (CCH-21)**

**P & SC No.25049/2008 HG: 23/10/2009**

**PETITIONER** : 1. N.Lakshmana @ Lakshminarayana S/o late Sri Nagappa 75 yrs R/at No. 23/15&16, 10th Main, 6th Cross, Motappanapalya Indiranagar, Bangalore-38

**V/s**

**RESPONDENTS** : Nil

**PUBLIC NOTICE**

Notice is hereby given that a petition has been made to this Court Under Sec 278 of the Indian Succession Act, for grant of Letter of Administration in respect of the schedule mentioned below of Sri Munipillappa and Smt Parvathamma who died on 21/3/06 and 1/9/07, at No.1 G No.11th street, Jogupalya Halasuru Bangalore-560 008.

Be it known that no caveat has been entered and the said petition is posted for hearing on 23/10/2009 at 11'O clock. Any person's claiming to have any interest may come and participate in the proceedings before grant of Letter of Administration to the petitioner.

**Schedule**

All that piece and parcel of the immovable property comprising of 16 Old Mangalore Tiled Roffed Houses bearing Nos.23/1 to 23/16 at Katha Nos.284 to 287 along with Lord Sri Shani Mahatma Temple, constructed by the petitioner on the schedule property situated at 10th Main, 6th cross, Motappanapalya, Indiranagar II Stage, Bangalore-560038, measuring on the Eastern side 199 Ft., on the Western side 192 Feet, on the Northern Side 45 feet on the Southern side 67 feet and bounded on the

East by: Passage and 43 Feet Wide Road,

West by: Private Property

North by: The house and temple belonging to the Owner and private Property, and

South by: 5 ft. Passage which leads towards the 5th Cross Road,

Given under my hand and the seal of the Court, this the 31st day of August 2009.

By Order of the Court

P.D. 109 Asst. Registrar, City Civil Court, Mayohall, Unit, Bangalore.

**IN THE COURT OF THE IV ADDL. CITY CIVIL JUDGE AT MAYOHALL:BANGALORE (CCH-21)**

**G & W.C.No.25007/2009 HG: 16/10/2009**

**PETITIONER** : Rebecca priya D/o Rajashekar 15 yrs Since minor represented by her father and natural guardian Sri I Rajashekar R/at No.27, 5th Main, 8th Cross, Krishnappa Block, Ganganagar Extension, Bangalore-32

**V/s**

**RESPONDENTS** : Nil

**PUBLIC NOTICE**

Notice is hereby given that a petition has been made to this Court Under Sec 29&30 of Guardian and Wards Act, prays for permission to the petitioner to mortgage the schedule property by deposit of title deeds in favour of PNB Housing Finance Limited or any other financial institutions or bank for the purpose of availing housing loan for constructions of residential house on the schedule on behalf of the minor. It is also just and necessary to grant such permission.

Be it to known that no caveat has been entered and the said petition is posted for hearing on 16/10/2009. Any persons claimed to have interest may come and participate in the proceedings before grant of permission.

**SCHEDULE**

All that piece and parcel of property bearing No.32 Municipal No.27, PID No.98-89-27, OLD KHATA No.14/1, 8th Cross Road, Krishnappa Block Ganganagar, Bangalore, measuring East to West: 30 feet and North to South: 22 feet, consisting of ground floor building, bounded on the

East by: Site bearing No.33

West by: Site bearing No.31,

North by: Property of Sri Chikkanna alias Bhyrappa

South by: Road.

Given under my hand and the seal of the Court, this the 5th day of September 2009.

By Order of the Court

P.D. 110 Asst. Registrar, City Civil Court, Mayohall, Bangalore.

**IN THE COURT OF THE IV ADDL. CITY CIVIL JUDGE AT MAYOHALL:BANGALORE (CCH-21)**

**P & S.C.No.25035/2008 HG: 07/11/2009**

**PETITIONER** : Sri Randhir Balagopal, S/o late Sri K.P.Balagopal, aged about 55 years, R/at No.002, Royal Elegant Apartments, 53/2, 1st Main, 15th Cross, AECS Layout, Sanjaynagar, Bangalore-94.

**V/s**

**RESPONDENTS** : Nil

**PUBLIC NOTICE**

Notice is hereby given that a petition has been made to this Court Under Sec 370 & 372 of the Indian Succession Act, for grant of Succession Certificate in respect of the amount Kuwait Dinar 1,194,795/- i.e. and equivalent of Rs.1,76,000/- if calculated in Indian currency, of deceased Smt Sulekha Randhir, Who died on 27/10/03 at Bangalore.

Be it known that no caveat has been entered and the said petition is posted for hearing on 07/11/2009 at 11'O clock. Any person's claiming to have any interest may come and participate in the proceedings before grant of Succession Certificate to the petitioner.

**SCHEDULE**

An amount of Kuwait Dinar 1,194,795 (One thousand one hundred and niety four Kuwait dinar and seven hundred ninety five fils only) i.e. an equivalent of Rs.1,76,000/- (Rupees One lakh seventy six thousand only) if calculated in Indian currency payable by the Secretary General, Kuwait University at A1-Diwan Translation Centre to the deceased Smt Sulekha Randhir.

Given under my hand and the seal of the Court, this the 5th day of September 2009.

By Order of the Court

P.D. 111 Asst. Registrar, City Civil Court, Mayohall, Unit, Bangalore.

**IN THE COURT OF THE IV ADDL. CITY CIVIL JUDGE AT MAYOHALL:BANGALORE (CCH-21)**

**P & S.C.No.25026/2009 HG: 24/10/2009**

**PETITIONER** :
1. Smt G. Manikya 57 yrs W/o Late K. Govindaraj
2. G.Shashi Rekha 3 yrs D/o late K.Govindaraj W/o N.s. Vijaykumar
3. G.Harsha 30 yrs S/o Late K.Govindaraj All R/at Sri Lakshmi Nilaya No.189/6, 10th Main, 3rd Cross, Nandanam Colony Hormavu Main Road, Bangalore-43

**V/s**

**RESPONDENTS** : Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate in respect of the shares and Bank accounts of Sri Govindaraj.K who died on 28/1/09 at Lakshmi Nilaya No.189/6, 10th Main, 3rd Cross, Nandanam Colony Hormavu Main Road, Bangalore-43.

Be it known that no caveat has been entered and the said petition is posted for hearing on 24/10/2009 at 11'O clock. Any person's claiming to have any interest may come and participate in the proceedings before grant of Succession Certificate to the petitioner.

**SCHEDULE**

Lakshmi Vilas Bank Account No.0162351000000621

Vijaya Bank S/B 209596

Shares

Demate Account client No.10037746

1. Infosys 2. Tata Consultancy 3. Transtream

Given under my hand and the seal of the Court, this the 31st day of August 2009.

By Order of the Court

P.D. 112 Asst. Registrar, City Civil Court, Mayohall, Bangalore.

## ತುಮಕೂರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ

**ಅಧಿಸೂಚನೆ ಸಂಖ್ಯೆ: ADMN-I/115/2009, ದಿನಾಂಕ: 31ನೇ ಆಗಸ್ಟ್ 2009**

**ವಿಷಯ:** ಶೀಘ್ರಲಿಪಿಗಾರ / ಬೆರಳಚ್ಚುಗಾರ / ಬೆರಳಚ್ಚು–ನಕಲುಗಾರ ಮತ್ತು ಆದೇಶಿಕ ಜಾರಿಕಾರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** (1) ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-II/205/2004, ದಿನಾಂಕ: 02.05.2008.

(2) ಸರ್ಕಾರಿ ಅಧಿಸೂಚನೆ ಸಂಖ್ಯೆ: LAW /LAC-2008, ದಿನಾಂಕ: 13.02.2008.

(3) ಈ ಕಛೇರಿ ಆದೇಶ ಸಂಖ್ಯೆ: ಆಡಳಿತ– I–38/2009, ದಿನಾಂಕ: 14.05.2009.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 30.09.2009 ಸಂಜೆ 5–00 ಗಂಟೆ.**

**ಅರ್ಜಿ ಸಲ್ಲಿಸಬೇಕಾದ ವಿಳಾಸ :–** ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ನ್ಯಾಯಾಲಯ, ತುಮಕೂರು ಜಿಲ್ಲೆ,
ತುಮಕೂರು.

(1) ಶೀಘ್ರಲಿಪಿಗಾರ ಹುದ್ದೆ: (Stenographers)

I. ಹುದ್ದೆಗಳ ಸಂಖ್ಯೆ: 4

II. ವೇತನ ಶ್ರೇಣಿ:– 7275–175–7800–200–8600–225–9500–250–10500–300–12300–350–13350– ಇತರ ಭತ್ಯೆಗಳೊಂದಿಗೆ.

III. ಹುದ್ದೆಗಳ ವರ್ಗೀಕರಣ:–

IV.

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಒಟ್ಟು |
|---|---|---|---|
| ಪರಿಶಿಷ್ಟ ಜಾತಿ | 1 | – | 1 |
| ಪ್ರವರ್ಗ– 2A | 1 | – | 1 |
| ಪ್ರವರ್ಗ– 3B | 1 | – | 1 |
| ಸಾಮಾನ್ಯ ಅರ್ಹತೆ | – | 1 | 1 |
| **ಒಟ್ಟು** | **3** | **1** | **4** |

**IV. ಶೈಕ್ಷಣಿಕ ವಿದ್ಯಾರ್ಹತೆ :–**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(2) ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆಯು ನಡೆಸುವ ಹಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ

(3) ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯು ನಡೆಸುವ ಸೆಕ್ರೆಟೆರಿಯಲ್ ಪ್ರ್ಯಾಕ್ಟೀಸ್ ಪಠ್ಯಕ್ರಮದ ಡಿಪ್ಲೊಮಾ ಪದವಿಯೊಂದಿಗೆ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

V. **ಅರ್ಹತಾ ಪರೀಕ್ಷೆ:–**

(1) 1 ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ.

**II. ಬೆರಳಚ್ಚುಗಾರ : (TYPIST) :**

I. ಹುದ್ದೆಗಳ ಸಂಖ್ಯೆ: 02

II. ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500 – ಇತರ ಭತ್ಯೆಗಳೊಂದಿಗೆ.

III. **ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | ಮಹಿಳಾ ಅಭ್ಯರ್ಥಿ | ಅಂಗವಿಕಲ | ಒಟ್ಟು |
|---|---|---|---|
| ಪರಿಶಿಷ್ಟ ಜಾತಿ | 1 | | 1 |
| ಸಾಮಾನ್ಯ ಅರ್ಹತೆ | | 1 | 1 |
| **ಒಟ್ಟು** | **1** | **1** | **2** |

**IV. ಶೈಕ್ಷಣಿಕ ವಿದ್ಯಾರ್ಹತೆ :–**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**V. ಅರ್ಹತಾ ಪರೀಕ್ಷೆ:–**

(1) ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**(III) ಬೆರಳಚ್ಚು – ನಕಲುಗಾರ : (TYPIST-COPYIST)**

I. ಹುದ್ದೆಗಳ ಸಂಖ್ಯೆ : 02

II. **ವೇತನ ಶ್ರೇಣಿ:–** 5800–100–6000–125–6500–150–7100–175–7800–200–8600–225–9500–250–10500– ಇತರ ಭತ್ಯೆಗಳೊಂದಿಗೆ.

**III. ಹುದ್ದೆಗಳ ವರ್ಗೀಕರಣ:–**

| ವರ್ಗೀಕರಣ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಒಟ್ಟು |
|---|---|---|---|
| ಪರಿಶಿಷ್ಟ ಜಾತಿ | 1 | – | 1 |
| ಸಾಮಾನ್ಯ ಅರ್ಹತೆ | – | 1 | 1 |
| **ಒಟ್ಟು** | **1** | **1** | **2** |

IV. **ಶೈಕ್ಷಣಿಕ ವಿದ್ಯಾರ್ಹತೆ :–**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

V. **ಅರ್ಹತಾ ಪರೀಕ್ಷೆ :–**

(1) ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**(IV) ಆದೇಶಿಕ ಜಾರಿಕಾರ (PROCESS SERVER):**

ಹುದ್ದೆಗಳ ಸಂಖ್ಯೆ: 02

ವೇತನ ಶ್ರೇಣಿ: 5200–100–6000–125–6500–150–7100–175–7800–200–8200.

**III. ಹುದ್ದೆಗಳ ವರ್ಗೀಕರಣ:–**

| ವರ್ಗೀಕರಣ | ಇತರೆ | ಗ್ರಾಮೀಣ ಅಭ್ಯರ್ಥಿ | ಒಟ್ಟು |
|---|---|---|---|
| ಪ್ರವರ್ಗ– 2A | – | 1 | 1 |
| ಸಾಮಾನ್ಯ ಅಭ್ಯರ್ಥಿ | 1 | – | 1 |
| **ಒಟ್ಟು** | **1** | **1** | **2** |

IV. **ಶೈಕ್ಷಣಿಕ ವಿದ್ಯಾರ್ಹತೆ:–**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(2) ಡ್ರೈವಿಂಗ್ ಲೈಸೆನ್ಸನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**ಸಾಮಾನ್ಯ ಸೂಚನೆಗಳು:**

(1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗ್ತೀಕರಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

(2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಹಾಗೂ ಮೀಸಲಾತಿಯಡಿಯಲ್ಲಿ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

(3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

(4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಲಗ್ತೀಕರಿಸಿದ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

(5) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ/ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

(6) ಶೀಘ್ರಲಿಪಿಗಾರ, ಬೆರಳಚ್ಚುಗಾರ ಮತ್ತು ಬೆರಳಚ್ಚು–ನಕಲುಗಾರ ಹುದ್ದೆಗಳ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿ ಅರ್ಹರಾದ ಅಭ್ಯರ್ಥಿಗಳಿಗೆ 1 : 5 ರ ಅನುಪಾತದಲ್ಲಿ , ಸಂದರ್ಶನಕ್ಕೆ ಕರೆ ನೀಡಲಾಗುವುದು.

(7) ಜಾರಿಪೇದೆ ಹುದ್ದೆಯ ಅಭ್ಯರ್ಥಿಗಳಿಗೆ ಅರ್ಹತೆ ಮೇರೆಗೆ 1 : 25 ರ ಅನುಪಾತದಲ್ಲಿ, ಸಂದರ್ಶನಕ್ಕೆ ಕರೆ ನೀಡಲಾಗುವುದು.

**(8) ವಯೋಮಿತಿ:–**

(ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

(ಆ) **ಗರಿಷ್ಟ ವಯೋಮಿತಿ :–** ಸಾಮಾನ್ಯ ವರ್ಗ : 35 ವರ್ಷಗಳು

2ಎ, 2ಬಿ, 3ಎ, 3ಬಿ : 38 ವರ್ಷಗಳು

ಪರಿಶಿಷ್ಟಜಾತಿ: ಪರಿಶಿಷ್ಟಪಂಗಡ/ ಪ್ರವರ್ಗ– 1 : 40 ವರ್ಷಗಳು

(ಇ) ಮಾಜಿ ಸೈನಿಕರಿಗೆ ಗರಿಷ್ಟ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಆಗುವುದೋ ಅಷ್ಟು ವರ್ಷಗಳ ಸಡಿಲಿಕೆ.

(ಈ) ವಿಧವೆಯರಿಗೆ ಮತ್ತು ಅಂಗವಿಕಲರಿಗೆ ಹತ್ತು ವರ್ಷಗಳ ಸಡಿಲಿಕೆ.

(ಉ) ಹುಟ್ಟಿದ ದಿನಾಂಕವನ್ನು ತೋರಿಸಿರುವ ಪ್ರಮಾಣ ಪತ್ರದ ಪ್ರತಿಯನ್ನು ಸ್ವಯಂ ದೃಢೀಕರಿಸಿ ಸಲ್ಲಿಸತಕ್ಕದ್ದು.

**(9) ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರು ಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು:–**

(ಅ) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.

(ಆ) ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ತಹಶೀಲ್ದಾರರಿಂದ ಪಡೆದಿರುವ ಪ್ರಮಾಣ ಪತ್ರ.

(ಇ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ– 1 ಮತ್ತು 2 ರಲ್ಲಿ.

(ಈ) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.

(ಉ) ಅಂಗವಿಕಲ ಅಭ್ಯರ್ಥಿಗಳು ನಿಗದಿ ಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ (ಶೇಕಡಾ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು).

(ಊ) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಮತ್ತು ವಿಧವೆಯರು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

**(10) ಆಯ್ಕೆ ವಿಧಾನ:–**

(ಅ) ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007 ರ ಪ್ರಕಾರ ನಡೆಸಲಾಗುವುದು.

(ಆ) ಯಾವುದೇ ವರ್ಗಗಳ ಮಹಿಳಾ, ಗ್ರಾಮೀಣ, ಅಂಗವಿಕಲ ಅಥವಾ ಮಾಜಿ ಸೈನಿಕ ಮೀಸಲಾತಿ ಇರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದ ಪಕ್ಷದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗಗಳ ಅರ್ಹ ಇತರ ಅಭ್ಯರ್ಥಿಗಳಿಂದ ತುಂಬಿಕೊಳ್ಳಲಾಗುವುದು

**(11) ಅಭ್ಯರ್ಥಿಗಳಿಗೆ ಸೂಚನೆ:–**

(ಅ) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

(ಆ) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(ಇ) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಛಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.

(ಈ) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ 5–00 ರೂ.ಗಳ ಸ್ಟಾಂಪು ಲಗತ್ತಿಸಿರುವ ಸ್ವವಿಳಾಸವಿರುವ ಲಕೋಟೆಯನ್ನು ಲಗತ್ತಿಸಿರಬೇಕು.

(ಉ) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ನಮೂದಿಸಿರಬೇಕು.

(ಊ) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

(ಋ) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.

(ೠ) ವಿವರ ತುಂಬಿರುವ ಅರ್ಜಿಗಳನ್ನು ಈ ಕಛೇರಿಯ ವಿರಾಮದ ವೇಳೆಯನ್ನು ಹೊರತುಪಡಿಸಿ ಕೆಲಸದ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ತುಮಕೂರು.

**ಅರ್ಜಿ ನಮೂನೆ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ತುಮಕೂರು ಜಿಲ್ಲೆ , ತುಮಕೂರು – ಇವರಿಗೆ

ಭಾವಚಿತ್ರ

ಮಾನ್ಯರೆ,

ತುಮಕೂರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ:ಎಡಿಎಂ –I-115/2009 ದಿನಾಂಕ:31.08.2009 ರ ಪ್ರಕಾರ ಆದೇಶಿಕ ಜಾರಿಕಾರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | |
|---|---|---|---|---|---|
| 1. | ಅಭ್ಯರ್ಥಿಯ ಹೆಸರು | | | | |
| 2. | ತಂದೆಯ / ತಾಯಿಯ / ಗಂಡನ ಹೆಸರು | | | | |
| 3. | ಪೂರ್ಣ ವಿಳಾಸ | | | | |
| 4. | ವಯಸ್ಸು ಮತ್ತು ಜನ್ಮ ದಿನಾಂಕ | | | | |
| 5. | ಲಿಂಗ | ಪುರುಷ/ ಮಹಿಳೆ | | | |
| 6. | ರಾಷ್ಟ್ರೀಯತೆ :<br>ಮತ :<br>ಜಾತಿ /ಉಪಜಾತಿ : | | | | |
| 7. | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ ? | | | | |
| 8. | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು :– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡ ವಾರು ಅಂಕಗಳು |
| ಎ. | ಎಸ್.ಎಸ್.ಎಲ್.ಸಿ./ತತ್ಸಮಾನ | | | | |

| | | | | | |
|---|---|---|---|---|---|
| ಬಿ. | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| 9. | ಜಾತಿ/ಗ್ರಾಮೀಣ/ಮಾಜಿಸೈನಿಕ/ ಅಂಗವಿಕಲ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 10. | ಅರ್ಜಿದಾರರು ವಾಹನ ಚಾಲನೆಯ ಲೈಸೆನ್ಸ್ ಹೊಂದಿರುವರೇ? (ಆದೇಶಿಕ ಜಾರಿಕಾರ ಹುದ್ದೆಗೆ ಮಾತ್ರ) | | | | |
| 11. | ಸಲ್ಲಿಸಲು ಇಚ್ಚೆ ಪಡುವ ಇತರ ಯಾವುದಾದರು ವಿವರಗಳು | | | | |

**ಸೂಚನೆ :–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕುವುದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ/ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ತುಮಕೂರು ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ.

---

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ / ಶ್ರೀಮತಿ ________________________ ಇವರು ನಮ್ಮ ಇಲಾಖೆಯಲ್ಲಿ ದಿನಾಂಕ: ರಿಂದ ರವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು ____________ ಹುದ್ದೆಗೆ ಅರ್ಹರಿರುತ್ತಾರೆ ಮತ್ತು ____________ ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ದಿನಾಂಕ: ಪದನಾಮ:

ಕಛೇರಿಯ ಮೊಹರು:

**ಅರ್ಜಿ ನಮೂನೆ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ತುಮಕೂರು ಜಿಲ್ಲೆ , ತುಮಕೂರು – ಇವರಿಗೆ

ಭಾವಚಿತ್ರ

ಮಾನ್ಯರೆ,

ತುಮಕೂರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ:ಎಡಿಎಂ –I–115/2009 ದಿನಾಂಕ:31.08.2009 ರ ಪ್ರಕಾರ ಶೀಘ್ರಲಿಪಿಗಾರ/ಬೆರಳಚ್ಚುಗಾರ/ ಬೆರಳಚ್ಚು–ನಕಲುಗಾರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ತಂದೆಯ / ತಾಯಿಯ / ಗಂಡನ ಹೆಸರು | |

| | | |
|---|---|---|
| 3. | ಪೂರ್ಣ ವಿಳಾಸ | |
| 4. | ವಯಸ್ಸು ಮತ್ತು ಜನ್ಮ ದಿನಾಂಕ | |
| 5. | ಲಿಂಗ | ಪುರುಷ/ ಮಹಿಳೆ |
| 6. | ರಾಷ್ಟ್ರೀಯತೆ :<br>ಮತ :<br>ಜಾತಿ /ಉಪಜಾತಿ : | |
| 7. | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ ? | |
| 8. | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು :– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | |

| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡ ವಾರು ಅಂಕಗಳು |
|---|---|---|---|---|---|
| ಎ. | ಎಸ್.ಎಸ್.ಎಲ್.ಸಿ./ತತ್ಸಮಾನ | | | | |
| ಬಿ. | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ<br>ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಸಿ. | ಹಿರಿಯ/ಕಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಡಿ. | ಹಿರಿಯ/ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಎಫ್ | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| 9. | ಜಾತಿ/ಗ್ರಾಮೀಣ/ಮಾಜಿಸೈನಿಕ/ಅಂಗ ವಿಕಲ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 10. | ಅರ್ಜಿದಾರರು ವಾಹನ ಚಾಲನೆಯ ಲೈಸೆನ್ಸ್ ಹೊಂದಿರುವರೇ? (ಆದೇಶಿಕ ಜಾರಿಕಾರ ಹುದ್ದೆಗೆ ಮಾತ್ರ) | | | | |
| 11. | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರು ವಿವರಗಳು | | | | |

**ಸೂಚನೆ:**– ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕುವುದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ/ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ತುಮಕೂರು ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ.

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ / ಶ್ರೀಮತಿ ______________________________ ಇವರು ನಮ್ಮ ಇಲಾಖೆಯಲ್ಲಿ ದಿನಾಂಕಃ ರಿಂದ ರವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು ______________ ಹುದ್ದೆಗೆ ಅರ್ಹರಿರುತ್ತಾರೆ ಮತ್ತು ______________ ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ದಿನಾಂಕ: ಪದನಾಮ:

ಪಿ.ಆರ್. 775 ಕಛೇರಿಯ ಮೊಹರು:

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನದ ಪಕ್ಕದ ಕಟ್ಟಡ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2/ಉಅಸಂ(ಬೆಂಗ್ರಾ)/ಬಿಯುಡಿ/ವಿವ–15/09–10, ದಿನಾಂಕ: 10ನೇ ಸೆಪ್ಟೆಂಬರ್ 2009**

**ವಿಷಯ:** 2009–10ನೇ ಸಾಲಿನಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಮುಂಗಡ ಕಾಮಗಾರಿ ಹಾಗೂ ಇನ್ನಿತರೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವ ಕುರಿತು.

2009–10ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ವಿಭಾಗದಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಮುಂಗಡ ಕಾಮಗಾರಿ ಹಾಗೂ ಇನ್ನಿತರೆ ಅರಣ್ಯೀಕರಣ ಕಾಮಗಾರಿಗಳನ್ನು ಕೈಗೊಳ್ಳಲು ಬೆಂಗಳೂರು ಗ್ರಾಮಾಂತರ ವಿಭಾಗದಲ್ಲಿ ನೊಂದಾಯಿತರಾಗಿರುವ ಅರಣ್ಯ ಗುತ್ತಿಗೆದಾರರಿಂದ ದಿನಾಂಕ 29–09–2009 ರಂದು ಮತ್ತು 5–10–2009 ರಂದು ಟೆಂಡರನ್ನು ಕರೆಯಲಾಗಿದೆ. ಟೆಂಡರನ್ನು ದಿನಾಂಕ 29–09–2009 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕ 29–09–2009 ರಂದು ನಡೆಯುವ ಟೆಂಡರ್‌ನಲ್ಲಿ ಅರಣ್ಯ ಗುತ್ತಿಗೆದಾರರು ಭಾಗವಹಿಸದೇ ಇದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ತಿಳಿದು ದಿನಾಂಕ:5–10–2009 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ 29–09–2009 ರಂದು ಮತ್ತು 5–10–2009 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1 ಗಂಟೆಯವರೆಗೆ ಈ ಕಛೇರಿಯಿಂದ ಪಡೆಯಬಹುದಾಗಿದೆ. ವಿವಿಧ ಯೋಜನೆಗಳ ವಿವರ ಹಾಗೂ ಕೆಲಸದ ವಿವರ ಈ ಕೆಳಗೆ ನೀಡಲಾಗಿರುವ ಷೆಡ್ಯೂಲ್‌ನಲ್ಲಿರುವಂತಿರುತ್ತವೆ.

**ಷೆಡ್ಯೂಲ್**

**I. ಕರ್ನಾಟಕ ಸುಸ್ಥಿರ ಅರಣ್ಯ ನಿರ್ವಹಣೆ ಯೋಜನೆ:–**

| ಕ್ರ. ಸಂ. | ಸ್ಥಳ | ಕಾಮಗಾರಿ ವಿವರ | ಮಾದರಿ ಸಂಖ್ಯೆ | ಭೌತಿಕ (ಹೆ. ಗಳಲ್ಲಿ / ಸಸಿಗಳು ಸಾವಿರಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|---|
| 1 | Devanahalli Range | Advance works under Assisted Natural Regeneration during 2009-10 | M2 | 50 | 520000-00 | 13000.00 | 31-12-2009 |
| 2 | Devanahalli Range | Advance works under Assisted Natural Regeneration during 2009-10 (Soil & Moisture Conservation) | M-2 | 50 | 183000-00 | 4575-00 | 31-12-2009 |
| 3 | Hosakote Range | Advance works under Fuel Wood & Small Timber Plantation during 2009-10 | M-4 | 79 | 1135546-00 | 28389-00 | 31-12-2009 |
| 4 | Hosakote Range | Advance works under Fuel Wood & Small Timber Plantation during 2009-10 (Soil & Moisture Conservation) | M-4 | 79 | 444770-00 | 11119-00 | 31-12-2009 |

**II. ಕ್ಷೀಣಿತ ಅರಣ್ಯ ಅಭಿವೃದ್ಧಿ ಯೋಜನೆ:**

| ಕ್ರ. ಸಂ. | ಸ್ಥಳ | ಕಾಮಗಾರಿ ವಿವರ | ಭೌತಿಕ (ಹೆ. ಗಳಲ್ಲಿ / ಸಸಿಗಳು ಸಾವಿರಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|
| 1 | Nelamangala Range | Advance works at Nijagal Block-I during 2009-10 | 25 | 253500-00 | 6337-00 | 31-12-2009 |

**III. Resource Augmentation Medicinally Impartment Trees**

| ಕ್ರ. ಸಂ. | ಸ್ಥಳ | ಕಾಮಗಾರಿ ವಿವರ | ಭೌತಿಕ (ಹೆ. ಗಳಲ್ಲಿ / ಸಸಿಗಳು ಸಾವಿರಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|
| 1 | Hosakote Range | Advance works–Raising Medicinal Plants (bosewellia serata) at Appasandra during 2009-10 | 25 | 230510-00 | 5763-00 | 31-12-2009 |
| 2 | Hosakote Range | Advance works–Raising Medicinal Plants (bosewellia serata) at Jadigenahalli during 2009-10 | 25 | 230510-00 | 5763-00 | 31-12-2009 |

**IV. Bio-Fuel Programme**

| ಕ್ರ. ಸಂ | ಸ್ಥಳ | ಕಾಮಗಾರಿ ವಿವರ | ಭೌತಿಕ (ಹೆ. ಗಳಲ್ಲಿ / ಸಸಿಗಳು ಸಾವಿರಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|
| 1 | Nelamangala Range | Raising Trench Plantation during 2009-10 | 20 | 494000-00 | 12350-00 | 31-12-2009 |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಫಾರಂ ಒಂದಕ್ಕೆ ರೂ. 200.00ಗಳು ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ:29.09.2009 ರಂದು ಕಚೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಒಂದು ವೇಳೆ 29–09–2009 ರಂದು ಟೆಂಡರ್ ನಡೆಯದೇ ಇದ್ದಲ್ಲಿ ದಿನಾಂಕ 05–10–2009 ರಂದು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2009–10ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದ್ದಲ್ಲಿ ಅಂತಹವರ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 29–09–2009ರಂದು ಅಪರಾಹ್ನ 1.30 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಹಾಗೂ ಅಂದೇ ಅಪರಾಹ್ನ 4.00 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 5–10–2009 ರಂದು ಅಪರಾಹ್ನ 4.00 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ದ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆಯೇ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು
5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.

7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸದಿದ್ದಲ್ಲಿ ಅಂತಹವುಗಳನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರು ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು. ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಹೊಂದಿರುತ್ತಾರೆ.
11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ. ಹಾಗೂ ಹಣ ಬಿಡುಗಡೆಯಾಗದಿದ್ದಲ್ಲಿ ಅಂತಹ ಕಾಮಗಾರಿಗಳನ್ನು ಅನುಷ್ಠಾನದಿಂದ ಕೈ ಬಿಡಲಾಗುವುದು.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ. ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಸರ್ ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು. ಮತ್ತು ಉಂಟಾದ ನಷ್ಟವನ್ನು ಅವರಿಂದ ವಸೂಲಿ ಮಾಡಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಿಕೊಳ್ಳಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರ ಯಾವುದೇ ಕಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರಬೇಕಾಗಿರುತ್ತದೆ.
19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ. 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯ ಅಧಿಕಾರಿ ಮತ್ತು ಸಹಾಯಕ ಅರಣ್ಯ

